## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ : 736(89)
ಸದಸ್ಯರ ಹೆಸರು : ಶ್ರೀ ಡಾ.ಚಂದ್ರಶೇಖರ್ ಬಿ.ಪಾಟೀಲ್(ಪದವೀಧರರ ಕ್ಷೇತ್ರ).
ಉತ್ತರಿಸುವ ದಿನಾಂಕ : 20/09/2021.
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರಿ ನೌಕರರಿಗೆ "ಜ್ಯೋತಿ ಸಂಜೀವಿನಿ" ಮೂಲಕ ವೈದ್ಯಕೀಯ ಸೌಲಭ್ಯವನ್ನು ಒದಗಿಸುವಂತೆ, ಅನುದಾನಿತ ಪ್ರಾಥಮಿಕ, ಪ್ರೌಢ ಮತ್ತು ಪದವಿ ಪೂರ್ವ ಕಾಲೇಜುಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಶಿಕ್ಷಕರಿಗೆ ಮತ್ತು ಉಪ ನ್ಯಾಸಕರಿಗೆ, ವಿಸ್ತರಿಸಲು ಕ್ರಮ ವಹಿಸಲಾಗುವುದೇ; | ಸರ್ಕಾರಿ ನೌಕರರಿಗೆ ಚಿಕಿತ್ಸೆ ಪಡೆದ ನಂತರ ಸದರಿ ಮೊತ್ತವನ್ನು ನಿಯಮಾನುಸಾರ ಪರಿಶೀಲಿಸಿ ಹಿಂಬರಿಸಲಾಗುತ್ತಿತ್ತು. ಪ್ರಸ್ತುತ ಜ್ಯೋತಿ ಸಂಜೀವಿನಿ ಯೋಜನೆಯಡಿ ನಗದು ರಹಿತ ಚಿಕಿತ್ಸೆಯನ್ನು ನೀಡಲಾಗುತ್ತಿದೆ. ಆದರೆ ಅನುದಾನಿತ ಶಾಲಾ ಕಾಲೇಜುಗಳ ನೌಕರರು ಕರ್ನಾಟಕ ಶಿಕ್ಷಣ ಅಧಿನಿಯಮ-1983 ಮತ್ತು ಅದರಡಿ ರಚಿಸಲ್ಪಟ್ಟ ಕರ್ನಾಟಕ ಶಿಕ್ಷಣ ಸಂಸ್ಥೆಗಳ (Classification, Regulation and Prescrition of Curricula) ನಿಯಮಗಳು-1995ರ ವ್ಯಾಪ್ತಿಗೆ ಒಳಪಡುತ್ತಾರೆ ಇವರನ್ನು ಸರ್ಕಾರಿ ನೌಕರರೆಂದು ಪರಿಗಣಿಸಲಾಗುವುದಿಲ್ಲ.<br><br>ಮುಂದುವರೆದು, ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗಳು ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು-1963ರ ವ್ಯಾಪ್ತಿಗೆ ಒಳಪಡುವುದಿಲ್ಲ ಹಾಗೂ ಕರ್ನಾಟಕ ಶಿಕ್ಷಣ ಸಂಸ್ಥೆಗಳು(ಖಾಸಗಿ ಅನುದಾನಿತ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಂಸ್ಥೆಗಳ ನೌಕರರ ನೇಮಕಾತಿ ಮತ್ತು ಸೇವಾ ಷರತ್ತು ಹಾಗೂ ನಿಬಂಧನೆಗಳು) ನಿಯಮಗಳು 1999ರ ಅನುಬಂಧ -ii (3) ರನ್ವಯ ವೈದ್ಯಕೀಯ ವೆಚ್ಚ ಮರುಪಾವತಿ ಸೌಲಭ್ಯಕ್ಕೂ ಅರ್ಹರಾಗಿರುವುದಿಲ್ಲ. ಆದುದರಿಂದ ಅನುದಾನಿತ ಸಿಬ್ಬಂದಿಗಳು ಜ್ಯೋತಿ ಸಂಜೀವಿನಿ ಯೋಜನೆಯ ವ್ಯಾಪ್ತಿಗೆ ಬರುವುದಿಲ್ಲ. |
| ಆ) | ಇಲ್ಲದಿದ್ದಲ್ಲಿ, ಶಿಕ್ಷಕರಿಗೂ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸಲು ಸರ್ಕಾರವು ಕೈಗೊಳ್ಳುವ ಕ್ರಮಗಳೇನು; ಹಾಗೂ ಈ ಕುರಿತು ಸರ್ಕಾರದ ಸ್ಪಷ್ಟ ನಿಲುವೇನು? | |

ಸಂಖ್ಯೆ: ಇಪಿ 328 ಎಸ್ಇಎಸ್ 2021

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು